# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1297 |
| ಸದಸ್ಯರ ಹೆಸರು | : | ಶ್ರೀ ಎಸ್.ರವಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 08-03-2022 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಗಳು |

****

| ಕ್ರಮ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ಗ್ರಾಮಾಂತರ ಮತ್ತು ರಾಮನಗರ ಜಿಲ್ಲಾ ವ್ಯಾಪ್ತಿಯಲ್ಲಿರುವ ನಗರ ಯೋಜನೆ ಪ್ರಾಧಿಕಾರಗಳು ಯಾವುವು; ಅವುಗಳ ಕಾರ್ಯವ್ಯಾಪ್ತಿಯೇನು;' (ಸಂಪೂರ್ಣ ವಿವರ ನೀಡುವುದು) | ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರವು ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ಕಾಯ್ದೆ 1985ರ ಅಡಿಯಲ್ಲಿ 01.02.1986 ರಂದು ರಚನೆಯಾಗಿದೆ. ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಮತ್ತು ರಾಮನಗರ ಜಿಲ್ಲೆಗಳನ್ನು ಒಳಗೊಂಡು ಒಟ್ಟು ವ್ಯಾಪ್ತಿ 8005 ಚ.ಕಿ.ಮೀ ಗಳು ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ಕಾರ್ಯವ್ಯಾಪ್ತಿಯಾಗಿರುತ್ತದೆ.<br><br>ಯೋಜನಾ ಪ್ರಾಧಿಕಾರಗಳು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961 ರಡಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಪ್ರಮುಖ ಕಾರ್ಯಗಳು ಈ ಕೆಳಕಂಡಂತೆ ಇರುತ್ತವೆ.<br><br>• ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಗೆ ಮಹಾಯೋಜನೆಯನ್ನು ಸಿದ್ಧಪಡಿಸುವುದು ಮತ್ತು ಅನುಷ್ಠಾನಗೊಳಿಸುವುದು.<br>• ಮಹಾಯೋಜನೆಯ ವಲಯ ನಿಯಮಾವಳಿಗಳನ್ವಯ ಅಭಿವೃದ್ಧಿಗಳನ್ನು ನಿಯಂತ್ರಿಸುವುದು.<br>• ವಿವಿಧ ಉದ್ದೇಶಗಳಿಗೆ ವಿನ್ಯಾಸ ಅನುಮೋದಿಸುವುದು.<br>• ಕಟ್ಟಡ ನಿರ್ಮಿಸಲು, ವಲಯ ನಿಯಮಾವಳಿಗಳನ್ವಯ ಪರಿಶೀಲಿಸಿ ಪ್ರಾರಂಭಿಕ ಪ್ರಮಾಣ ಪತ್ರ ನೀಡುವುದು.<br>• ಕಾಯ್ದೆಯಲ್ಲಿ ನಿಗಧಿಪಡಿಸಿದ ಸಂದರ್ಭಗಳಲ್ಲಿ ಭೂ ಉಪಯೋಗ ಬದಲಾವಣೆ ಪ್ರಸ್ತಾವನೆಗಳನ್ನು ಸರ್ಕಾರಕ್ಕೆ ಸಲ್ಲಿಸುವುದು.<br>• Town Planning Schemes ಗಳನ್ನು ರೂಪಿಸಿ ಅನುಷ್ಠಾನಗೊಳಿಸುವುದು.<br><br>ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಯಲ್ಲಿನ ಯೋಜನಾ ಪ್ರಾಧಿಕಾರಗಳು ಮತ್ತು ಅವುಗಳ ಕಾರ್ಯವ್ಯಾಪ್ತಿಗಳು ಈ ಕೆಳಕಂಡಂತಿರುತ್ತವೆ. |

| ಬೆಂಗಳೂರು ಗ್ರಾಮಾಂತರ ಜಿಲ್ಲೆ | | | |
|---|---|---|---|
| ಕ್ರ ಸಂ. | ಪ್ರಾಧಿಕಾರ | ಕಾರ್ಯವ್ಯಾಪ್ತಿ | ಷರಾ |
| 1 | ಉಪನಗರ ವರ್ತುಲ ರಸ್ತೆ | ಉಪನಗರ ವರ್ತುಲ ರಸ್ತೆ ಸ್ಥಳೀಯ ಯೋಜನಾ ಪ್ರದೇಶವು 'ಬೆಂಗಳೂರು ಮಹಾನಗರ ಪ್ರದೇಶ' ದಲ್ಲಿ ಇರುತ್ತದೆ. | ಕಾರ್ಯವ್ಯಾಪ್ತಿಯು ಬೆಂಗಳೂರು ನಗರ, ಬೆಂಗಳೂರು |

| | | | | | |
|---|---|---|---|---|---|
| | | | (STRR) ಯೋಜನಾ ಪ್ರಾಧಿಕಾರ | ಉಪನಗರ ವರ್ತುಲ ರಸ್ತೆ ಸ್ಥಳೀಯ ಯೋಜನಾ ಪ್ರದೇಶವು ಬೆಂಗಳೂರು ಗ್ರಾಮಾಂತರ, ಬೆಂಗಳೂರು ನಗರ ಮತ್ತು ರಾಮನಗರ ಜಿಲ್ಲೆಗಳ 331 ಗ್ರಾಮಗಳನ್ನು ಒಳಗೊಂಡಂತೆ ವಿಸ್ತೀರ್ಣ 101952.76ಹೆಕ್ಟೇರ್ (1019.52ಚ.ಕಿ.ಮೀ) ಇರುತ್ತದೆ.<br><br>ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲ ತಾಲ್ಲೂಕಿನ 57 ಗ್ರಾಮಗಳು, ದೇವನಹಳ್ಳಿ ತಾಲ್ಲೂಕಿನ 39 ಗ್ರಾಮಗಳು, ದೊಡ್ಡಬಳ್ಳಾಪುರ ತಾಲ್ಲೂಕಿನ 40 ಗ್ರಾಮಗಳು, ಹೊಸಕೋಟೆ ತಾಲ್ಲೂಕಿನ 51 ಗ್ರಾಮಗಳು, ಬೆಂಗಳೂರು ನಗರ ಜಿಲ್ಲೆಯ ಆನೇಕಲ್ ತಾಲ್ಲೂಕಿನ 47 ಗ್ರಾಮಗಳು, ರಾಮನಗರ ಜಿಲ್ಲೆಯ. ಕನಕಪುರ ತಾಲ್ಲೂಕಿನ 32 ಗ್ರಾಮಗಳು, ಮಾಗಡಿ ತಾಲ್ಲೂಕಿನ 44 ಗ್ರಾಮಗಳು ಮತ್ತು ರಾಮನಗರ ಮತ್ತು ಚನ್ನಪಟ್ಟಣ ತಾಲ್ಲೂಕಿನ 21 ಗ್ರಾಮಗಳು ಒಟ್ಟು 331 ಗ್ರಾಮಗಳು ಇರುತ್ತವೆ. | ಗ್ರಾಮಾಂತರ ಮತ್ತು ರಾಮನಗರ ಜಿಲ್ಲೆಯಲ್ಲಿರುತ್ತದೆ. |
| | | 2 | ಬೆಂಗಳೂರು ಅಂತರಾಷ್ಟ್ರೀಯ ವಿಮಾನ ನಿಲ್ದಾಣ ಪ್ರದೇಶ ಯೋಜನಾ ಪ್ರಾಧಿಕಾರ | ಬೆಂಗಳೂರು ಅಂತರಾಷ್ಟ್ರೀಯ ವಿಮಾನ ನಿಲ್ದಾಣ ಪ್ರದೇಶ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಯಲ್ಲಿ ದೇವನಹಳ್ಳಿ ತಾಲ್ಲೂಕಿನ 188 ಗ್ರಾಮಗಳು ಮತ್ತು ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಜಾಲ ಹೋಬಳಿಯ 35 ಗ್ರಾಮಗಳು ಒಟ್ಟು 223 ಗ್ರಾಮಗಳು ಪ್ರಾಧಿಕಾರದ ಕಾರ್ಯವ್ಯಾಪ್ತಿಯಲ್ಲಿರುತ್ತವೆ. | ಕಾರ್ಯವ್ಯಾಪ್ತಿಯು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿರುತ್ತದೆ. |
| | | 3 | ಹೊಸಕೋಟೆ ಯೋಜನಾ ಪ್ರಾಧಿಕಾರ | ಹೊಸಕೋಟೆ ಸ್ಥಳೀಯ ಯೋಜನಾ ಪ್ರದೇಶವು ಹೊಸಕೋಟೆ ತಾಲ್ಲೂಕಿನ 249 ಗ್ರಾಮಗಳು ಮತ್ತು ಬೆಂಗಳೂರು ಪೂರ್ವ ತಾಲ್ಲೂಕಿನ ಬಿದರಹಳ್ಳಿ ಹೋಬಳಿಯ 16 ಗ್ರಾಮಗಳು ಸೇರಿದಂತೆ ಒಟ್ಟಾರೆಯಾಗಿ 265 ಗ್ರಾಮಗಳನ್ನು ಒಳಗೊಂಡಿದೆ. | ಕಾರ್ಯವ್ಯಾಪ್ತಿಯು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿರುತ್ತದೆ. |
| | | 4 | ನೆಲಮಂಗಲ ಯೋಜನಾ ಪ್ರಾಧಿಕಾರ | ನೆಲಮಂಗಲ ಸ್ಥಳೀಯ ಯೋಜನಾ ಪ್ರದೇಶವು ನೆಲಮಂಗಲ ತಾಲ್ಲೂಕಿನ 243 ಗ್ರಾಮಗಳು, ಮಾಗಡಿ ತಾಲ್ಲೂಕಿನ 42 ಗ್ರಾಮಗಳು ಮತ್ತು ಬೆಂಗಳೂರು ಉತ್ತರ ತಾಲ್ಲೂಕಿನ 42 ಗ್ರಾಮಗಳು ಒಟ್ಟು 345 ಗ್ರಾಮಗಳನ್ನು ಒಳಗೊಂಡಿದೆ. | ಕಾರ್ಯವ್ಯಾಪ್ತಿಯು ಬೆಂಗಳೂರು ನಗರ, ಗ್ರಾಮಾಂತರ ಮತ್ತು ರಾಮನಗರ ಜಿಲ್ಲೆಯಲ್ಲಿರುತ್ತದೆ. |
| | | 5 | ದೊಡ್ಡಬಳ್ಳಾಪುರ ಯೋಜನಾ ಪ್ರಾಧಿಕಾರ | ದೊಡ್ಡಬಳ್ಳಾಪುರ ಸ್ಥಳೀಯ ಯೋಜನಾ ಪ್ರದೇಶವು ದೊಡ್ಡಬಳ್ಳಾಪುರ ತಾಲ್ಲೂಕು, ಕಸಬಾ, ದೊಡ್ಡಬೆಳವಂಗಲ, ಸಾಸಲು, ಮಧುರೆ, ತೂಬಗೆರೆ ಹೋಬಳಿಗಳ ಒಟ್ಟು 265 ಗ್ರಾಮಗಳು ಮತ್ತು ಬೆಂಗಳೂರು ಉತ್ತರ ತಾಲ್ಲೂಕು ಹೆಸರಘಟ್ಟ ಹೋಬಳಿಯ 29 ಗ್ರಾಮಗಳು ಸೇರಿದಂತೆ ಒಟ್ಟು 294 ಗ್ರಾಮಗಳನ್ನು ಒಳಗೊಂಡಿದೆ. | ಕಾರ್ಯವ್ಯಾಪ್ತಿಯು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿರುತ್ತದೆ. |

ರಾಮನಗರ ಜಿಲ್ಲೆ

| ಕ್ರ ಸಂ. | ಪ್ರಾಧಿಕಾರ | ಕಾರ್ಯವ್ಯಾಪ್ತಿ | ಷರಾ |
|---|---|---|---|
| 1 | ಗ್ರೇಟರ್ ಬೆಂಗಳೂರು – ಬಿಡದಿ ಸ್ಮಾರ್ಟ್ ಸಿಟಿ ಯೋಜನಾ ಪ್ರಾಧಿಕಾರ | ಗ್ರೇಟರ್ ಬೆಂಗಳೂರು – ಬಿಡದಿ ಸ್ಮಾರ್ಟ್ ಸಿಟಿ ಯೋಜನಾ ಪ್ರಾಧಿಕಾರವು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರದೇಶದ ವ್ಯಾಪ್ತಿಯಲ್ಲಿ ಬರುತ್ತಿದ್ದು, ಸರ್ಕಾರದಿಂದ ರಚಿತವಾಗಿರುವ ಸ್ವತಂತ್ರ ಯೋಜನಾ ಪ್ರಾಧಿಕಾರವಾಗಿರುತ್ತದೆ. ಈ ಪ್ರಾಧಿಕಾರವು ರಾಮನಗರ ಜಿಲ್ಲೆಯ<br>1) ರಾಮನಗರ ತಾ॥, ಬಿಡದಿ ಹೋಬಳಿಯ –26 ಗ್ರಾಮಗಳು,<br>2) ರಾಮನಗರ ತಾ॥, ಕೈಲಾಂಚ ಹೋಬಳಿಯ –03 ಗ್ರಾಮಗಳು,<br>3) ರಾಮನಗರ ತಾ॥, ರಾಮನಗರ ಹೋಬಳಿಯ –08 ಗ್ರಾಮಗಳು<br>4) ಕನಕಪುರ ತಾ॥, ಹಾರೋಹಳ್ಳಿ ಹೋಬಳಿಯ –01 ಗ್ರಾಮ.<br>ಒಟ್ಟು 38 ಗ್ರಾಮಗಳ ವ್ಯಾಪ್ತಿಯನ್ನು ಒಳಗೊಂಡಿರುತ್ತದೆ. | ಕಾರ್ಯವ್ಯಾಪ್ತಿಯು ರಾಮನಗರ ಜಿಲ್ಲೆಯಲ್ಲಿರುತ್ತದೆ. |
| 2 | ಮಾಗಡಿ ಯೋಜನಾ ಪ್ರಾಧಿಕಾರ | ಮಾಗಡಿ ಸ್ಥಳೀಯ ಯೋಜನಾ ಪ್ರದೇಶವು 224 ಗ್ರಾಮಗಳನ್ನು ಒಳಗೊಂಡಿದ್ದು, 640.00 ಚ.ಕಿ.ಮೀ ವಿಸ್ತೀರ್ಣವಿರುತ್ತದೆ. ಬೆಂಗಳೂರು ದಕ್ಷಿಣ ತಾಲ್ಲೂಕು, ತಾವರೆಕೆರೆ ಹೋಬಳಿಯ 36 ಗ್ರಾಮಗಳು ಮತ್ತು ಮಾಗಡಿ ತಾಲ್ಲೂಕಿನ ಕಸಬಾ, ಮಡಬಾಳ್ ಸೋಲೂರು, ಕುದೂರು ಮತ್ತು ತಿಪ್ಪಸಂದ್ರ ಹೋಬಳಿಗಳಲ್ಲಿ 188 ಗ್ರಾಮಗಳು ಪ್ರಾಧಿಕಾರದ ಕಾರ್ಯವ್ಯಾಪ್ತಿಯಲ್ಲಿರುತ್ತದೆ. | ಕಾರ್ಯವ್ಯಾಪ್ತಿಯು ರಾಮನಗರ ಜಿಲ್ಲೆಯಲ್ಲಿರುತ್ತದೆ. |
| 3 | ಕನಕಪುರ ಯೋಜನಾ ಪ್ರಾಧಿಕಾರ | ಕನಕಪುರ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಯು 235 ಗ್ರಾಮಗಳು, ಬೆಂಗಳೂರು ದಕ್ಷಿಣ ತಾಲ್ಲೂಕಿನ 14 ಗ್ರಾಮಗಳು ಹಾಗೂ ಕನಕಪುರ ತಾಲ್ಲೂಕಿನ 221 ಗ್ರಾಮಗಳನ್ನು ಒಳಗೊಂಡಿದೆ. | ಕಾರ್ಯವ್ಯಾಪ್ತಿಯು ರಾಮನಗರ ಜಿಲ್ಲೆಯಲ್ಲಿರುತ್ತದೆ. |
| 4 | ಚನ್ನಪಟ್ಟಣ ಯೋಜನಾ ಪ್ರಾಧಿಕಾರ | ಚನ್ನಪಟ್ಟಣ ಯೋಜನಾ ಪ್ರಾಧಿಕಾರವು ಚನ್ನಪಟ್ಟಣ ತಾಲ್ಲೂಕು, ಕಸಬಾ, ಮಳೂರು ಮತ್ತು ವಿರೂಪಾಕ್ಷಿಪುರ ಹೋಬಳಿ ಹಾಗೂ ಚನ್ನಪಟ್ಟಣ ನಗರ ವ್ಯಾಪ್ತಿ ಸೇರಿದಂತೆ ಒಟ್ಟು 116 ಗ್ರಾಮಗಳನ್ನು ಒಳಗೊಂಡಿದೆ. | ಕಾರ್ಯವ್ಯಾಪ್ತಿಯು ರಾಮನಗರ ಜಿಲ್ಲೆಯಲ್ಲಿರುತ್ತದೆ. |
| 5 | ರಾಮನಗರ ನಗರಾಭಿವೃದ್ಧಿ ಪ್ರಾಧಿಕಾರ | ರಾಮನಗರ ನಗರಾಭಿವೃದ್ಧಿ ಪ್ರಾಧಿಕಾರ ವ್ಯಾಪ್ತಿಯು 37 ಗ್ರಾಮಗಳನ್ನು ಒಳಗೊಂಡಿದ್ದು, 169.98 ಚ.ಕಿ.ಮೀ ಗಳ ವಿಸ್ತೀರ್ಣವಿರುತ್ತದೆ. | ಕಾರ್ಯವ್ಯಾಪ್ತಿಯು ರಾಮನಗರ ಜಿಲ್ಲೆಯಲ್ಲಿರುತ್ತದೆ. |

| | | |
|---|---|---|
| ಆ) | ಕಳೆದ 5 ವರ್ಷಗಳಲ್ಲಿ ಈ ನಗರ ಯೋಜನೆ ಪ್ರಾಧಿಕಾರಗಳಿಂದ ಯಾವ ಯಾವ ಪ್ರದೇಶಗಳಲ್ಲಿ ವಸತಿ | ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯಡಿಯಲ್ಲಿ ಯೋಜನಾ ಪ್ರಾಧಿಕಾರಗಳಿಂದ ಬಡಾವಣೆಗಳ ನಿರ್ಮಾಣ ಮಾಡಲು ಅವಕಾಶವಿರುವುದಿಲ್ಲ. ರಾಮನಗರ ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಕಳೆದ 05 ವರ್ಷಗಳಲ್ಲಿ ಯಾವುದೇ ವಸತಿ ಬಡಾವಣೆಗಳನ್ನು ನಿರ್ಮಾಣ ಮಾಡಲಾಗಿರುವುದಿಲ್ಲ. |

| | | |
|---|---|---|
| | ಬಡಾವಣೆಯನ್ನು ನಿರ್ಮಾಣ ಮಾಡಲಾಗಿದೆ; ಈ ಬಡಾವಣೆಗಳಲ್ಲಿ ಎಷ್ಟು ನಿವೇಶನಗಳನ್ನು ನಿರ್ಮಾಣ ಮಾಡಲಾಗಿದೆ; ಇವುಗಳ ವಿಸ್ತೀರ್ಣವೆಷ್ಟು; ಈ ಬಡಾವಣೆಗಳನ್ನು ಯಾವಾಗ ನಿರ್ಮಾಣ ಮಾಡಲಾಗಿದೆ; (ಬಡಾವಣೆವಾರು ವಿವರ ನೀಡುವುದು) | |
| ಇ) | ಈ ಪ್ರಾಧಿಕಾರಗಳು ಬಡಾವಣೆಗಳ ಅಭಿವೃದ್ಧಿಗಾಗಿ ಇಲ್ಲಿಯವರೆಗೆ ಕೈಗೊಂಡಿರುವ ಕಾಮಗಾರಿಗಳು ಯಾವುವು; ಈ ಕಾಮಗಾರಿಗಳನ್ನು ಯಾವಾಗ ಪ್ರಾರಂಭಿಸಲಾಗಿದೆ; ಈ ಕಾಮಗಾರಿಗಳ ವೆಚ್ಚವೆಷ್ಟು; ಈ ಕಾಮಗಾರಿಗಳಿಗಾಗಿ ಇಲ್ಲಿಯವರೆಗೆ ಬಿಡುಗಡೆ ಮಾಡಿರುವ ಅನುದಾನವೆಷ್ಟು; ಈ ಕಾಮಗಾರಿಗಳನ್ನು ನಿರ್ವಹಿಸಿರುವ ಗುತ್ತಿಗೆದಾರರ ವಿವರಗಳೇನು? (ಬಡಾವಣೆವಾರು ಮಾಹಿತಿ ನೀಡುವುದು) | ಅನ್ವಯಿಸುವುದಿಲ್ಲ. |

**ಸಂಖ್ಯೆ: ನಅಇ 43 ಬಿಎಂಆರ್ 2022**

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ